<u>ಕರ್ನಾಟಕ ವಿಧಾನ ಪರಿಷತ್ತು</u>

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 904
ಸದಸ್ಯರ ಹೆಸರು : ಶ್ರೀ ಅರವಿಂದ ಕುಮಾರ್ ಅರಳಿ
(ವಿಧಾನಸಭೆಯಿಂದ ಚುನಾಯಿತರಾದವರು)
ಉತ್ತರಿಸಬೇಕಾದ ದಿನಾಂಕ: : 17.09.2021
ಉತ್ತರಿಸುವ ಸಚಿವರು : ಕೃಷಿ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಭಾರತದ ಪ್ರಧಾನ ಮಂತ್ರಿಗಳ ಕನಸಿನ ಯೋಜನೆಯಾದ ಮಿಲ್ಲೆಟ್ ಕ್ರಾಂತಿ ಯೋಜನೆಯನ್ನು ಜಾರಿಗೊಳಿಸಲು ರಾಜ್ಯ ಸರ್ಕಾರವು ಕೈಗೊಂಡಿರುವ ಕ್ರಮಗಳೇನು: (ಸಂಪೂರ್ಣ ಮಾಹಿತಿ ನೀಡುವುದು) | ಕೇಂದ್ರ ಪುರಸ್ಕೃತ ಯೋಜನೆಯಾದ ರಾಷ್ಟ್ರೀಯ ಆಹಾರ ಭದ್ರತಾ ಅಭಿಯಾನದಡಿ ನ್ಯೂಟ್ರಿಸಿರಿಧಾನ್ಯಗಳಿಗೆ (ನ್ಯೂಟ್ರಿ ಮಿಲ್ಲೆಟ್) ಹೆಚ್ಚು ಒತ್ತು ನೀಡಲಾಗುತ್ತಿದೆ. ಈ ಯೋಜನೆಯಡಿ 2021–22ನೇ ಸಾಲಿನಲ್ಲಿ ನ್ಯೂಟ್ರಿಸಿರಿಧಾನ್ಯ ಕಾರ್ಯಕ್ರಮವನ್ನು ಸಿರಿಧಾನ್ಯಗಳ (ಮಿಲ್ಲೆಟ್‌ಗಳ) ಕ್ಷೇತ್ರ ವಿಸ್ತರಣೆ ಹಾಗೂ ಉತ್ಪಾದಕತೆ ಹೆಚ್ಚಿಸುವ ನಿಟ್ಟಿನಲ್ಲಿ ಅನುಷ್ಠಾನಗೊಳಿಸಲಾಗುತ್ತಿದೆ. ಈ ಕಾರ್ಯಕ್ರಮಕ್ಕೆ ರೂ.71.71 ಕೋಟಿ ಅನುದಾನ ಮೀಸಲಿರಿಸಲಾಗಿದೆ.<br><br>ಮುಂದುವರೆದು, ಈ ಕಾರ್ಯಕ್ರಮದಲ್ಲಿ ಉತ್ಪಾದಕತೆ ಹೆಚ್ಚಿಸುವ ತಾಂತ್ರಿಕತೆಗಳಾದ ಸುಧಾರಿತ ಬಿತ್ತನೆ ಬೀಜ ವಿತರಣೆ, ಬೀಜೋತ್ಪಾದನೆಗೆ ಪ್ರೋತ್ಸಾಹಧನ, ಸಮಗ್ರ ಪೋಷಕಾಂಶಗಳ ನಿರ್ವಹಣೆ, ಸಮಗ್ರ ಪೀಡೆ ನಿರ್ವಹಣೆ, ಸಣ್ಣ, ಅತಿಸಣ್ಣ ರೈತರ ಸದುಪಯೋಗಕ್ಕಾಗಿ ಎತ್ತು ಚಾಲಿತ ಉಪಕರಣಗಳು, ಸ್ಪ್ರಿಂಕ್ಲರ್ ಸೆಟ್ ಸಹಾಯಧನದಲ್ಲಿ ವಿತರಣೆ ಹಾಗೂ ಸಿರಿಧಾನ್ಯಗಳ ವ್ಯಾಪಕ ಪ್ರಚಾರಕ್ಕಾಗಿ ಅರಿವು ಮೂಡಿಸುವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿರುತ್ತದೆ. |

| | | |
|---|---|---|
| | | ಇದಲ್ಲದೆ ರಾಜ್ಯದಲ್ಲಿ ಸಿರಿಧಾನ್ಯ ಪ್ರದೇಶವನ್ನು ವಿಸ್ತರಿಸುವ ನಿಟ್ಟಿನಲ್ಲಿ 'ರೈತ ಸಿರಿ' ಯೋಜನೆಯನ್ನು 2019-20ನೇ ಸಾಲಿನಿಂದ ಅನುಷ್ಠಾನ ಗೊಳಿಸಲಾಗುತ್ತಿದ್ದು, ಸಾವಯವ ಮತ್ತು ಸಾಂಪ್ರದಾಯಿಕವಾಗಿ ಬೆಳೆಯುವ ಸಿರಿಧಾನ್ಯಗಳಾದ ನವಣೆ, ಹಾರಕ, ಸಾಮೆ, ಕೊರಲೆ, ಬರಗು ಮತ್ತು ಊದಲು ಬೆಳೆಗಳನ್ನು (ರಾಗಿ, ಜೋಳ ಮತ್ತು ಸಜ್ಜೆ ಹೊರತುಪಡಿಸಿ) ಬೆಳೆಯುವ ರೈತರಿಗೆ ಬೆಳೆ ಸಮೀಕ್ಷೆ ಆಧಾರದ ಮೇರೆಗೆ ಗರಿಷ್ಠ ಎರಡು ಹೆಕ್ಟೇರ್ ಗೊಳಪಟ್ಟು ಪ್ರತೀ ಹೆಕ್ಟೇರ್ ಗೆ ರೂ.10000/- ಗಳಂತೆ ಪ್ರೋತ್ಸಾಹಧನ ನೀಡಲಾಗುತ್ತಿದೆ. |
| ಆ) | ಪೌಷ್ಠಿಕ ಆಹಾರಗಳಾದ ಮಿಲ್ಲೆಟ್, ಜೋಳ, ರಾಗಿ ಮುಂತಾದವುಗಳನ್ನು ನ್ಯಾಯಬೆಲೆ ಅಂಗಡಿಗಳ ಮುಖೇನ ವಿತರಿಸಲು ಕ್ರಮ ಕೈಗೊಳ್ಳಲಾಗಿದೆಯೇ: (ಹಾಗಿದ್ದಲ್ಲಿ, ವಿವರ ನೀಡುವುದು) | ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿ ಸಂಗ್ರಹಿಸಲಾಗುವ ಜೋಳ ಮತ್ತು ರಾಗಿಯನ್ನು ಸಾರ್ವಜನಿಕ ವಿತರಣಾ ಪದ್ಧತಿಯಡಿ ಪಡಿತರ ಫಲಾನುಭವಿಗಳಿಗೆ ಹಂಚಿಕೆ ಮಾಡಲಾಗುತ್ತಿದೆ. |
| ಇ) | ಸಾರ್ವಜನಿಕ ಪಡಿತರ ಮೂಲಕ ವಿತರಿಸಲು ಅಗತ್ಯವಿರುವಷ್ಟು ಮಿಲ್ಲೆಟ್, ರಾಗಿ, ಜೋಳ ರಾಜ್ಯದಲ್ಲಿ ಲಭ್ಯವಿದೆಯೇ? (ಪೂರ್ಣ ಮಾಹಿತಿ ನೀಡುವುದು) | 2020-21ನೇ ಸಾಲಿನ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿ ಸಂಗ್ರಹಿಸಲಾಗಿರುವ 4,74,098.246 ಮೆಟ್ರಿಕ್ ಟನ್ ರಾಗಿ ಹಾಗೂ 80,722.469 ಮೆಟ್ರಿಕ್ ಟನ್ ಜೋಳವನ್ನು ಸಾರ್ವಜನಿಕ ವಿತರಣಾ ಪದ್ಧತಿಯಡಿ ವಿತರಿಸಲಾಗುತ್ತಿದೆ. |

**ಸಂಖ್ಯೆ:ಕೃಇ/109/ಕೃಕೈಉ/2021**

(ಬಿ.ಸಿ.ಪಾಟೀಲ್)
ಕೃಷಿ ಸಚಿವರು